ಝಡ್. ಮಹಮದ್ ಜಫ್ರುಲ್ಲಾ*

# ನಾಯ್ಕನ ಹಟ್ಟಿ ಒಳ ಮಠ-ದೇವಾಲಯಗಳಲ್ಲಿ ಯೂರೋಪಿಯನ್ ಗಾರೆ ಶಿಲ್ಪಗಳು

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ನೈಋತ್ಯಕ್ಕೆ ೨೨ ಕಿ. ಮೀ. ದೂರದಲ್ಲಿ ಇರುವ ಪ್ರಸಿದ್ಧ ಐತಿಹಾಸಿಕ ಸ್ಥಳ ನಾಯಕನ ಹಟ್ಟಿ. ಈ ಹಟ್ಟಿಯ ಮೂಲ ಸ್ಥಾಪಕ ಮಲ್ಲಪ್ಪನಾಯಕ. ಮುಂದೆ ಇದು ಚಿತ್ರದುರ್ಗ ಪಾಳೆ ಪಟ್ಟನೊಡನೆ ವಿಲೀನಗೊಂಡು ದುರ್ಗದ ಪತನದವರೆಗೂ ಮುಂದುವರೆಯಿತು. ಹಟ್ಟಿಯನ್ನು ತರುವಾಯ ನಾಯ್ಕನ ಹಟ್ಟಿ ಎಂದು ಕರೆದರು. ಈ ಹಟ್ಟಿಯು ಪ್ರಸಿದ್ಧವಾದ ಒಂದು ಪುಣ್ಯಕ್ಷೇತ್ರವೂ ಆಗಿದೆ. ಇದು ಸಂತರಾದ ಶ್ರೀ ತಿಪ್ಪೇರುದ್ರ ಸ್ವಾಮಿಯವರು ನೆಲೆಸಿದ ಸ್ಥಳ. ಈ ಕ್ಷೇತ್ರಕ್ಕೆ ಜಾತ್ರೆಯ ಸಮಯದಲ್ಲಿ ಕರ್ನಾಟಕದಾದ್ಯಂತ ಯಾತ್ರಿಕರು ಬಂದು ಹೋಗುತ್ತಾರೆ. ಇಲ್ಲಿ ತಿಪ್ಪೇರುದ್ರ ಸ್ವಾಮಿಯವರ ಒಳ ಮಠ, ದೇವಾಲಯ ಮತ್ತು ಹೊರ ಮಠ ಎಂಬುವುಗಳಿವೆ. ಹೊರ ಮಠವು ಅರ್ಧ ಗೋಳಾಕಾರದ ಇಂಡೋ-ಇಸ್ಲಾಮಿಕ್ ಶೈಲಿಯ ಗುಮ್ಮಟವನ್ನು ಹೊಂದಿದೆ. ಒಳ ಮಠದ ದೇವಾಲಯವು ವಿಜಯನಗರ ಶೈಲಿಯಲ್ಲಿ ಸುಮಾರು ಹದಿನೆಂಟನೆಯ ಶತಮಾನದಲ್ಲಿ ನಿರ್ಮಾಣಗೊಂಡಿದೆ. ಈ ದೇವಾಲಯವು ಪಾಳಿ ಗೋಡೆ ಹೊಂದಿದ್ದು ಪೂರ್ವಾಭಿಮುಖವಾಗಿ ಮಹಾದ್ವಾರವನ್ನು ಹೊಂದಿದ್ದು ಅದು ಪಾಂಡ್ಯ ಶೈಲಿಯ ಗೋಪುರವನ್ನು ಹೊಂದಿದೆ.

ಈ ಗೋಪುರವು ಸುಮಾರು ೪೦ ಅಡಿ ಎತ್ತರವಿದ್ದು ಅನೇಕ ಪೌರಾಣಿಕ ದೃಶ್ಯಗಳನ್ನು ಗಾರೆಯಲ್ಲಿ ಬಿಡಿಸಿದ್ದಾರೆ. ಈ ಗೋಪುರವನ್ನು ಬಸೆಟ್ಟಪ್ಪನೆಂಬ ಭಕ್ತನೊಬ್ಬನು ನಿರ್ಮಿಸಿದನು. ದೇವಸ್ಥಾನದ ಒಳಗೆ ಮತ್ತು ಮಹಾದ್ವಾರದ ಮೇಲಿರುವ ಅನೇಕ ಶಿಲ್ಪಗಳ ಜೊತೆಗೆ ಗೋಪುರದ ಮೊದಲನೆಯ ಪಟ್ಟಿಕೆಯಲ್ಲಿ ಮತ್ತು ಒಳಗೆ ಗಾರೆಗಚ್ಚಿನಲ್ಲಿ ಯೂರೋಪಿಯನ್ನರ ಕೆಲವು ಶಿಲ್ಪಗಳನ್ನು ಮೂಡಿಸಲಾಗಿದೆ. ಮಹಾದ್ವಾರದ ಮುಂಭಾಗದ ಎಡದಿಂದ ಮೊದಲನೆಯ ಗಾರೆಯ ಶಿಲ್ಪ ಹೀಗಿದೆ.

ಕುದುರೆಬಂಡಿಯೊಂದನ್ನು ಎಳೆಯುತ್ತಿರುವ ಕುದುರೆಯು ಅಲಂಕರಿಸಲ್ಪಟ್ಟಿದೆ. ಸಾರಥಿಯು ಯೂರೋಪಿಯನ್ ವ್ಯಕ್ತಿಯಾಗಿದ್ದಾನೆ. ಈ ವ್ಯಕ್ತಿಯು ತನ್ನ ಎಡಗೈಯಲ್ಲಿ ಕುದುರೆಯ ಲಗಾಮುವನ್ನು ಬಲಗೈಯಲ್ಲಿ ಚಾವಟಿಯನ್ನು ಹಿಡಿದಿರುವನು. ಕುದುರೆಯ ಕಾಲುಗಳಿಂದ ಈ ಬಂಡಿಯು ಚಲನೆಯಲ್ಲಿರುವುದು ವ್ಯಕ್ತವಾಗುವುದು. ಬಂಡಿಗೆ ಕಿಟಕಿಯೂ ಇರುವುದು. ಅದರ ಒಳಗಿರುವ ಒಬ್ಬ ವ್ಯಕ್ತಿ ಯೂರೋಪಿಯನ್ ಹ್ಯಾಟ್ ಧರಿಸಿರುವುದನ್ನು, ಅವನು ಹಾಕಿಕೊಂಡಿರುವ ಅಂಗಿಯು ಕತ್ತಿನವರೆಗೂ ಇದ್ದಂತೆ ಕಾಣುವುದು. ಆತನ ಮುಂದೆ ಇನ್ನೊಬ್ಬ ವ್ಯಕ್ತಿಯು ಕುಳಿತಿದ್ದು ತಲೆಯ ಮೇಲೆ ಯಾವ ತರಹದ ಹ್ಯಾಟ್ ಇಲ್ಲದಿದ್ದು ಆ ವ್ಯಕ್ತಿ ಸ್ತ್ರೀ ಎನ್ನಬಹುದು. ಬಂಡಿಯ ಚಕ್ರವನ್ನು ಸುಂದರವಾಗಿ ಮೂಡಿಸಿದ್ದಾರೆ. ಬಂಡಿಯ ಮುಂದೆ ಮೇನೆ

* ಇತಿಹಾಸ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು, ಚಿತ್ರದುರ್ಗ-೫೭೭೫೦೧

ಒಂದನ್ನು ಹೊತ್ತುಕೊಂಡು ಹೋಗುತ್ತಿರುವ ದೃಶ್ಯವೂ ಇದೆ. ಮೇನೆಯನ್ನು ಹೊತ್ತಿರುವವರು ಸ್ಥಳೀಯರು ಎಂಬುದು ಅವರು ಧರಿಸಿರುವ ಉಡುಪಿನಿಂದ ವ್ಯಕ್ತವಾಗುತ್ತದೆ. ಮೇನೆಯ ಒಳಗೆ ಇಬ್ಬರು ಇದ್ದು ಗಾತ್ರದಲ್ಲಿ ಸಣ್ಣದಾಗಿದ್ದು ತಲೆಯ ಮೇಲೆ ಹ್ಯಾಟನ್ನು ಧರಿಸಿರುವುದರಿಂದ ಆ ವ್ಯಕ್ತಿ ಒಬ್ಬ ಚಿಕ್ಕ ಹುಡುಗ ಇದ್ದಂತೆ ಕಾಣುತ್ತದೆ. ಹಾಗೂ ಆ ಬಾಲಕನೊಡನೆ ಇರುವ ವ್ಯಕ್ತಿಯೂ ಯೂರೋಪಿಯನ್ ಎಂಬುದಾಗಿ ತಲೆ ಕೂದಲಿನಿಂದ ಗುರುತಿಸಬಹುದು. ಪ್ರಾಯಶಃ ಸ್ತ್ರೀ ಇದ್ದರೂ ಇರಬಹುದು.

ಮೂರನೆಯದಾಗಿ ಮೇನೆಯ ಮುಂದೆ ಸುಂದರವಾಗಿ ಅಲಂಕರಿಸಿರುವ ಕುದುರೆಯೊಂದು ಇದ್ದು ಅದರ ಸವಾರನು ಯೂರೋಪಿಯನ್ ಎಂಬುದು ಅವನು ಧರಿಸಿರುವಕೋಟು ಹ್ಯಾಟು ಮತ್ತು ಕೂದಲುಗಳಿಂದ ಕಂಡುಬರುವುದು. ಅವನ ಬಲಗೈಯಲ್ಲಿ ಚಾಟಿ, ಎಡ ಕೈಯಲ್ಲಿ ಲಗಾಮು ಇರುವುವು ಮತ್ತು ಈ ಕುದುರೆಯ ಮುಂದೆ ಒಂಟೆಯೊಂದು ಸಾಗುತ್ತಿರುವ ದೃಶ್ಯ ಪ್ರಮುಖವಾದದ್ದು. ಅಲಂಕರಿಸಲ್ಪಟ್ಟ ಒಂಟೆಯ ಚಿತ್ರಣ ಪ್ರಮಾಣಬದ್ಧ ತಲೆಯ ಮೇಲೆ ಸವಾರ ಚಪ್ಪಟೆಯಾದಂತಹ ಟೋಪಿಯನ್ನು ಧರಿಸಿರುವನು. ಒಂಟೆಯ ಬಾಯಿ ತೆಗೆದಿದ್ದು ಹಲ್ಲುಗಳು ಸಹ ಕಂಡುಬರುತ್ತದೆ.

ನಾಲ್ಕನೆಯದಾಗಿ ಮೇಲೆ ಹೇಳಿರುವ ಯೂರೋಪಿಯನ್ನರನ್ನು ಸ್ವಾಗತಿಸಲು ಬಂದ ಹಾಗೆ ಸ್ಥಳೀಯ ವಾದ್ಯಗಾರರು ಇಬ್ಬರು ಇರುವರು. ಅವರಲ್ಲಿ ಮುಂದೆಯಿರುವನು ತಮಟೆಯನ್ನು ಬಾರಿಸುತ್ತಾ, ಹಿಂದೆಯಿರುವವರನ್ನು ಕಹಳೆಯನ್ನು ಊದುತ್ತಿದ್ದಾನೆ. ಇವರ ಹಿಂದೆ ಅತ್ಯಂತ ಸುಂದರವಾಗಿ ಕುದುರೆಯ ಮೇಲೆ ಸ್ಥಳೀಯ ಪ್ರಮುಖನೆನ್ನಬಹುದಾದ ಇಬ್ಬರ ಚಿತ್ರಣವಿದೆ. ಇವರು ಸೊಂಟಪಟ್ಟಿ ಧರಿಸಿದ್ದಾರೆ. ಕುದುರೆಯ ಮೇಲೆ ಅಲಂಕೃತ ಬಟ್ಟೆಯ ತರಹದ ವಸ್ತ್ರವಿದೆ. ಈ ವ್ಯಕ್ತಿಯ ಬಲಗೈ ತುಂಡಾಗಿದೆ. ಇವನು ಧರಿಸಿರುವ ತಲೆಯ ಮೇಲಿನ ಟೋಪಿಯು ಚಪ್ಪಟೆಯಾಗಿದೆ. ಈ ಕುದುರೆ ಸವಾರನೂ ಸಹ ಉದ್ದನೆಯ ಅಂಗಿ ಧರಿಸಿರುವ ಹಾಗೆ ಶಿಲ್ಪಿಸಿದ್ದಾರೆ. ಕುದುರೆಯ ಕತ್ತಿನ ಮೇಲಿನ ಕೂದಲಿನ ಎಳೆಗಳನ್ನು ಸೂಕ್ಷ್ಮವಾಗಿ ಗಾರೆಯಲ್ಲಿ ಮೂಡಿಸಿದ್ದಾರೆ. ಈ ಕುದುರೆಯ ಹಿಂದೆ ಇನ್ನೊಬ್ಬ ಕುದುರೆ ಸವಾರನು ಇದ್ದು ಕುದುರೆಯು ಮುಂದಿನ ಎಡಗಾಲನ್ನು ಎತ್ತಿದೆ. ಕುದುರೆ ಸವಾರನ ಬಲಗೈಯು ಮುರಿದಿದ್ದು ಸವಾರನ ಸೊಂಟದ ಪಟ್ಟಿಯೊಂದಿಗೆ ಕತ್ತಿಯೂ ಸಹ ಕಾಣುತ್ತದೆ. ಬಹುಶಃ ಇವರುಗಳು ಸ್ಥಳೀಯರು ಹಾಗೂ ಮೇಲೆ ಹೇಳಿರುವ ಯೂರೋಪಿಯನ್ನರನ್ನು ಸ್ವಾಗತಿಸಲು ಬಂದವರೆಂದು ಭಾವಿಸಬಹುದು. ಗೋಪುರದ ಎಡಭಾಗದ ಕೆಳಪಟ್ಟಿಯಲ್ಲಿ ಯೂರೋಪಿಯನ್ ಸವಾರನು ಒಬ್ಬನಿದ್ದು ತನ್ನ ಬಲಗೈಯಲ್ಲಿ ರಹದಾರಿ ಪತ್ರವೆನ್ನುವ ಹಾಗೆ ಇರುವ ವಸ್ತುವೊಂದನ್ನು ಹಿಡಿದು ಮುಂದೆ ಸಾಗುತ್ತಿದ್ದಾನೆ. ತಲೆಯ ಮೇಲೆ ಯೂರೋಪಿಯನ್ ಹ್ಯಾಟ್ ಧರಿಸಿರುವನು. ಎಡಗೈಯಲ್ಲಿ ಲಗಾಮಿದ್ದು ಕೋಟಿನ ತರಹದ ಬಟ್ಟೆಯನ್ನು ಧರಿಸಿರುವುದು ಕಾಣಬರುತ್ತದೆ. ಇವನ ಮುಂದೆ ಇಬ್ಬರೂ ತುತ್ತೂರಿ (ಶಹನಾಯಿ) ಬಾರಿಸುತ್ತಾ ನಿಂತಿರುವ ವಾದ್ಯಗಾರರಿದ್ದಾರೆ. ಇವರ ಉಡುಪು ೧೭ ಅಥವಾ ೧೮ನೇ ಶತಮಾನದ ಯೂರೋಪಿಯನ್ನರ ವಸ್ತ್ರಗಳಂತಿದ್ದು, ಅಗಲವಾದ ಸೊಂಟಪಟ್ಟಿಗಳನ್ನು ಧರಿಸಿದ್ದಾರೆ. ತಲೆಯ ಮೇಲೆ ಯೂರೋಪಿಯನ್ ಮಾದರಿಯ ಹ್ಯಾಟುಗಳು ಇರುವುವು. ಅವರ ಮುಂದೆ ವಾದ್ಯಗಳನ್ನು ನುಡಿಸುತ್ತಾ ನಿಂತಿರುವ ಇಬ್ಬರೂ ಪುರುಷರಾಗಿದ್ದು, ಇವರು ಧರಿಸಿರುವ ವಸ್ತ್ರಗಳು ಮತ್ತು ಎದೆಯ ಮೇಲಿರುವ ಭುಜದಿಂದ ಸೊಂಟದವರೆಗೂ ಇರುವ ಪಟ್ಟಿಗಳು ಮತ್ತು ನಿಂತಿರುವ ಭಂಗಿಯನ್ನು ಸೂಕ್ಷ್ಮವಾಗಿ ಅಭ್ಯಾಸಿಸಿದರೆ ಯೂರೋಪಿಯನ್ ವಾದ್ಯವೃಂದ ಎಂಬುದಾಗಿ ಹೇಳಬಹುದು. ಈ ವಾದ್ಯವೃಂದದ ಮುಂದೆ ಯೂರೋಪಿಯನ್ ಸೈನ್ಯದ ಪ್ರಮುಖನೆಂದು ಹೇಳಬಹುದಾದ ವ್ಯಕ್ತಿಯೊಬ್ಬ ನಿಂತಿದ್ದಾನೆ. ಇವನಿಗೆ ಭುಜಕೀರ್ತಿಗಳು ಇವೆ. ಎದೆಯ ಭಾಗದಲ್ಲಿ ಎಡಬಲ ಭುಜದಿಂದ ಸೊಂಟದವರೆಗೂ ಇರುವ ಪಟ್ಟಿಗಳಿವೆ. ಇವನು ಧರಿಸಿರುವ ತಲೆಯ ಟೋಪಿಯು ಭಿನ್ನವಾಗಿದ್ದು ಸ್ವಲ್ಪ ಉದ್ದವಾಗಿದೆ. ಇವನ ಮುಂದೆ ಹತ್ತು ಜನ ಸೈನಿಕರು ಪಥ ಸಂಚಲನದಲ್ಲಿದ್ದಾರೆ. ಇವರುಗಳು ತಮ್ಮ ಎಡಗೈ ಮತ್ತು ಎಡಗಾಲುಗಳನ್ನು ಮುಂದಿಟ್ಟು ಸಾಗುತ್ತಿರುವ ಹಾಗೆ, ತಮ್ಮ ಬಲಗೈಗಳಲ್ಲಿ ಚಾಕುವನ್ನು ಹೊಂದಿರುವಂತಹ ಕೋವಿಗಳನ್ನು ಬಲಭುಜದ

ಮೇಲಿಟ್ಟುಕೊಂಡು ಮುಂದೆ ಸಾಗುತ್ತಿದ್ದಾರೆ. ಇವರ ಸೊಂಟಪಟ್ಟಿಯು ಜೊತೆಗೆ ಕೋವಿ ಗುಂಡುಗಳ ಸಣ್ಣ ಚೀಲವೊಂದು ಇದ್ದಂತೆ ಇರುವುದು. ಇವರ ಹಿಂದೆ ಯುರೋಪಿಯನ್ ಕುದುರೆ ಸವಾರನು ಇದ್ದು ಸೊಂಟ ಪಟ್ಟಿಯೂ ಕಂಡುಬರುತ್ತದೆ. ಇವನೂ ಸಹ ಯುರೋಪಿಯನ್ ಹ್ಯಾಟನ್ನು ಧರಿಸಿ ಸೈನಿಕರ ಹಿಂದೆ ಸಾಗುತ್ತಿರುವನು.

ಗೋಪುರದ ಹಿಂದಿನ ಭಾಗದ ಕೆಳಪಟ್ಟಿಯಲ್ಲಿ ಯುರೋಪಿಯನ್ನರು ಶಿಕಾರಿ ಮಾಡುತ್ತಿರುವ ದೃಶ್ಯವೂ ಕೆತ್ತಲ್ಪಟ್ಟಿದೆ. ಒಬ್ಬ ಯುರೋಪಿಯನ್ ಕುದುರೆ ಸವಾರನು ಕಾಡು ಹಂದಿಯನ್ನು ಶಿಕಾರಿ ಮಾಡುತ್ತಿರುವ ಈ ದೃಶ್ಯದಲ್ಲಿ, ಕಾಡು ಹಂದಿಯ ಆಯಕಟ್ಟಿನ ಜಾಗದಲ್ಲಿ ಎರಡು ಬೇಟೆ ನಾಯಿಗಳು ಕಚ್ಚಿ ಹಿಡಿದಿರುವುದು ಈ ಕಾಡುಹಂದಿಯ ಮುಂಭಾಗದಲ್ಲಿ ಸ್ಥಳೀಯನೊಬ್ಬ ಅದನ್ನು ಭರ್ಜಿಯಿಂದ ಇರಿಯುತ್ತಿದ್ದಾನೆ ಅಥವಾ ಆಕ್ರಮಣ ಮಾಡುತ್ತಿದ್ದಾನೆ. ಇಲ್ಲಿ ಯುರೋಪಿಯನ್ ಕುದುರೆ ಸವಾರ ಹುಲಿಬೇಟೆಯಾಡುತ್ತಿದ್ದು, ಆ ಹುಲಿಯು ಒಬ್ಬ ಮನುಷ್ಯನನ್ನು ಬಾಯಲ್ಲಿ ಹಿಡಿದಿದ್ದು, ಆ ಹುಲಿಯನ್ನು ಯುರೋಪಿಯನ್ ಸವಾರನು ಕೋವಿಯಿಂದ ಹೊಡೆಯುತ್ತಿರುವ ದೃಶ್ಯವನ್ನು ರೂಪಿಸಲಾಗಿದೆ. ಅದರಲ್ಲೇ ಯುರೋಪಿಯನ್ ವ್ಯಕ್ತಿಯೊಬ್ಬನಿದ್ದು ಅವನನ್ನು ಸ್ಥಳೀಯ (?) ಸ್ತ್ರೀಯರು ಸುತ್ತುವರೆದಿರುವಂತೆ ಹಾಗೂ ಆ ವ್ಯಕ್ತಿ ಆ ಸ್ತ್ರೀಯರ ಕೈಗಳನ್ನು ಎಳೆಯುತ್ತಿರುವಂತೆ ಅಶ್ಲೀಲವೆನ್ನಿಸುವ ಗಾರೆಯ ಶಿಲ್ಪವೊಂದಿದೆ.

ಈ ಮೇಲಿನ ಯುರೋಪಿಯನ್ನರ ಗಾರೆ ಶಿಲ್ಪಗಳಿಂದ ಇವರುಗಳು ಫ್ರೆಂಚರೆಂಬಂತೆ, ೧೮ನೆಯ ಶತಮಾನದಲ್ಲಿ ಗಾರೆ ಕೆಲಸದ ಶಿಲ್ಪಿಗಳು ಅವರನ್ನು ಬಿಡಿಸಿರುವಂತೆ ಕಾಣುತ್ತದೆ ಮತ್ತು ಸ್ಥಳೀಯ ಜನತೆ ಇವರ ಪ್ರಭಾವಕ್ಕೆ ಎಷ್ಟರಮಟ್ಟಿಗೆ ಒಳಗಾಗಿದ್ದರು ಮತ್ತು ಇವರನ್ನು ಓಲೈಸುತ್ತಿದ್ದರು, ಎಂಬುದು ಮತ್ತು ದೇಶೀಯರ ಮೇಲೆ ಯುರೋಪಿಯನ್ನರು ಹೇಗೆ ರಾಜಕೀಯ ಪ್ರಭಾವ ಬೀರಿದ್ದರು ಎಂಬುದು ಈ ಶಿಲ್ಪಗಳಿಂದ ವ್ಯಕ್ತವಾಗುತ್ತದೆ. ಇದಲ್ಲದೆ ಬೇಟೆಯಂತಹ ಕ್ರೀಡೆಗಳಲ್ಲೂ ಸಹ ಯುರೋಪಿಯನ್ನರೂ ದೇಶೀಯರೊಟ್ಟಿಗೆ ಹೇಗೆ ತೊಡಗುತ್ತಿದ್ದರು ಎಂಬ ಶಿಲ್ಪವೂ ಸಹ ಇಲ್ಲಿ ಕಾಣಬರುತ್ತದೆ.

[ಈ ವಿಷಯದ ಅಧ್ಯಯನದ ಸಂದರ್ಭದಲ್ಲಿ ಸಹಕರಿಸಿದ ಚಿತ್ರದುರ್ಗದ ಗೆಳೆಯರಾದ ಸರ್ವಶ್ರೀ ಎಂ. ಅಬ್ದುಲ್ ರಜಾಕ್, ಬಿ. ರಾಜಶೇಖರಪ್ಪ, ರಾಮರೆಡ್ಡಿ ಮತ್ತು ನದೀಮ್ ಜಫರ್ ಅವರಿಗೆ ಕೃತಜ್ಞತೆಗಳು ಸಲ್ಲುತ್ತವೆ.]